


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 1148 (1355)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು )

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಮಾನ್ಯ ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು

ವಿಷಯ : ಎಂ.ಎಸ್.ಎಂ.ಇ. 2412 ಗಳ ಬೆಳವಣಿಗೆ ಬಗ್ಗೆ

(ಅ) ಭಾರತೀಯ ಬಂಡವಾಳ ಸರಕು ಕ್ಷೇತ್ರದ ಸ್ಪರ್ಧಾತ್ಮಕತೆ ಹೆಚ್ಚಿಸಲು ತುಮಕೂರಿನ ಅಮರಪುರದಲ್ಲಿ ಸೂಕ್ಷ್ಮ ಸಣ್ಣ ಮತ್ತು ಮಧ್ಯಮ ಉದ್ಯಮಗಳ (ಎಂ.ಎಸ್.ಎಂ.ಇ) ತಂತ್ರಜ್ಞಾನ ಕೇಂದ್ರವನ್ನು ಸ್ಥಾಪಿಸಲು ಸರ್ಕಾರ ಕ್ರಮಗಳನ್ನು ಪ್ರಾರಂಭಿಸಿದೆಯೇ ; (ವಿವರಗಳನ್ನು ನೀಡುವುದು)

(ಆ) 2017ರಲ್ಲಿ ಅಮರಪುರದಲ್ಲಿ ಎಂ.ಎಸ್.ಎಂ.ಇ ತಂತ್ರಜ್ಞಾನ ಕೇಂದ್ರವನ್ನು ಸ್ಥಾಪಿಸಲು ರಾಜ್ಯ ಸರ್ಕಾರವು ಈಗಾಗಲೇ 15 ಎಕರೆ ಭೂಮಿಯನ್ನು ಉಚಿತವಾಗಿ ಸ್ವಾಧೀನಪಡಿಸಿಕೊಂಡಿದೆಯೇ; ಹಾಗೂ ವರ್ಗಾಯಿಸಿದೆಯೇ ; (ವಿವರಗಳನ್ನು ನೀಡುವುದು)

(ಇ) ಕಾಮಗಾರಿ ಪೂರ್ಣಗೊಂಡ ಪ್ರಸ್ತುತ ಸ್ಥಿತಿ ಮತ್ತು ಕೇಂದ್ರವನ್ನು ಸ್ಥಾಪಿಸಲು ದಿನಾಂಕವನ್ನು ನಿಗದಿಪಡಿಸಲಾಗಿದೆಯೇ; (ವಿವರಗಳನ್ನು ನೀಡುವುದು)

(ಈ) ಮುಂದಿನ ಮೂರು ವರ್ಷಗಳಲ್ಲಿ ನಿಗದಿಪಡಿಸಿದ ಬೆಳವಣಿಗೆಯ ಗುರಿಗಳನ್ನು ಸಾಧಿಸಲು ಸರ್ಕಾರ ಕೈಗೊಂಡ/ ಕೈಗೊಳ್ಳಬೇಕಾದ ಕ್ರಮಗಳೇನು ?